# ಕರ್ನಾಟಕ ವಿಧಾನ ಪರಿಷತ್ತು

1. ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : **844**
2. ಸದಸ್ಯರ ಹೆಸರು : ಶ್ರೀ ರಘುನಾಥ್ ರಾವ್ ಮಲ್ಕಾಪೂರೆ (ವಿಧಾನಸಭೆಯಿಂದ ಚುನಾಯಿತರಾದವರು)
3. ಉತ್ತರಿಸುವ ದಿನಾಂಕ : **09.03.2021**
4. ಉತ್ತರಿಸುವ ಸಚಿವರು : ಮಾನ್ಯ ಪೌರಾಡಳಿತ ಹಾಗೂ ಸಕ್ಕರೆ ಸಚಿವರು

| ಕ್ರ. ಸಂ | ಪ್ರಶ್ನೆ | ಉತ್ತರ |
|---|---|---|
| (ಅ) | ಬೀದರ್ ಜಿಲ್ಲೆಯ ಹುಮನಾಬಾದ ತಾಲ್ಲೂಕಿನ ಹಳ್ಳಿಕೆಡನಲ್ಲಿರುವ ಬಿ.ಎಸ್.ಎಸ್.ಕೆ ಸಕ್ಕರೆ ಕಾರ್ಖಾನೆ ಸ್ಥಗಿತವಾಗಿರುವುದು ಸರ್ಕಾರದ ಗಮನಕ್ಕೆ ಬಂದಿದಿಯೇ; (ಸಂಪೂರ್ಣ ವಿವರ ನೀಡುವುದು) | ಬಂದಿದೆ.<br>ಬೀದರ್ ಸಹಕಾರಿ ಸಕ್ಕರೆ ಕಾರ್ಖಾನೆ ನಿ., ಹಳ್ಳಿಖೇಡ್, ಹುಮನಾಬಾದ ತಾಲ್ಲೂಕು, ಬೀದರ್ ಜಿಲ್ಲೆ ಈ ಕಾರ್ಖಾನೆಯು ದುಡಿಯುವ ಬಂಡವಾಳದ ಕೊರತೆ ಮತ್ತು ಇತರೆ ಆಡಳಿತಾತ್ಮಕ ಕಾರಣಗಳಿಂದಾಗಿ 2019-20ನೇ ಹಂಗಾಮಿನಿಂದ ಕಬ್ಬು ಅರೆಯುವ ಕಾರ್ಯವನ್ನು ಸ್ಥಗಿತಗೊಳಿಸಿರುತ್ತದೆ.<br>2017-18ನೇ ಸಾಲಿನಲ್ಲಿ ಬಿ.ಎಸ್.ಎಸ್.ಕೆ ಕಾರ್ಖಾನೆಗೆ ದುಡಿಯುವ ಬಂಡವಾಳವಾಗಿ ರೂ.10.00 ಕೋಟಿಗಳ ಸಾಲ ಪಡೆಯಲು ರಾಜ್ಯ ಸರ್ಕಾರದಿಂದ ಖಾತರಿ ನೀಡಲಾಗಿದೆ. 2018-19ನೇ ಹಂಗಾಮಿನಲ್ಲಿ ದುಡಿಯುವ ಬಂಡವಾಳಕ್ಕಾಗಿ ರೂ.20.00 ಕೋಟಿಗಳ ಸಾಲ ಮಂಜೂರು ಮಾಡಲಾಗಿದೆ. ರಾಜ್ಯ ಸರ್ಕಾರವು ಈ ಕಾರ್ಖಾನೆಗೆ ಇದುವರೆಗೆ ರೂ.53.94 ಕೋಟಿಗಳಷ್ಟು ಸಾಲ ಮತ್ತು ರೂ.4.64 ಕೋಟಿಗಳಷ್ಟು ಷೇರು ಬಂಡವಾಳ ಸೇರಿದಂತೆ ಒಟ್ಟು ರೂ.58.58 ಕೋಟಿಗಳಷ್ಟು ಆರ್ಥಿಕ ನೆರವನ್ನು ನೀಡಲಾಗಿದೆ. ಕಾರ್ಖಾನೆ ಪ್ರಸಕ್ತ ಹೊಂದಿರುವ ಒಟ್ಟು ಸಾಲ ಮತ್ತು ಜವಾಬ್ದಾರಿಗಳು ರೂ.274.87 ಕೋಟಿಗಳಷ್ಟಿದ್ದು, ಕ್ರೋಢೀಕೃತ ನಷ್ಟ ರೂ.307.00ಕೋಟಿಗಳಷ್ಟಿರುತ್ತದೆ. |
| (ಆ) | ಈ ಸಕ್ಕರೆ ಕಾರ್ಖಾನೆಯನ್ನು ಯಾವಾಗ ಪ್ರಾರಂಭಿಸಲಾಯಿತೇ; | ಈ ಕಾರ್ಖಾನೆಯು ಸಹಕಾರ ಸಂಘಗಳ ಕಾಯ್ದೆಯಡಿ ನೋಂದಣಿಗೊಂಡು 1968-69ನೇ ಸಾಲಿನಲ್ಲಿ 1250 ಟಿಸಿಡಿ ಸಾಮರ್ಥ್ಯದೊಂದಿಗೆ ಕಬ್ಬು ಅರೆಯುವ ಕಾರ್ಯವನ್ನು ಪ್ರಾರಂಭ ಮಾಡಿರುತ್ತದೆ. ಪ್ರಸ್ತುತ ಕಾರ್ಖಾನೆಯ ಕಬ್ಬು ಅರೆಯುವ ಸಾಮರ್ಥ್ಯವು 3500 ಟಿಸಿಡಿಗಳಾಗಿರುತ್ತದೆ. |
| (ಇ) | ಸದರಿ ಕಾರ್ಖಾನೆಯು ಪ್ರಸ್ತುತ ಸ್ಥಗಿತಗೊಂಡಿರಲು ಕಾರಣವೇನು; (ಸ್ಪಷ್ಟ ಮಾಹಿತಿ ನೀಡುವುದು) | ಈ ಕಾರ್ಖಾನೆಯು 2019-20ನೇ ಹಂಗಾಮಿನಿಂದ ಕಬ್ಬು ಅರೆಯುವ ಕಾರ್ಯವನ್ನು ಸ್ಥಗಿತಗೊಳಿಸಿರುತ್ತದೆ. ಕಾರ್ಖಾನೆಯು ಸ್ಥಗಿತಗೊಂಡಿರಲು ಪ್ರಮುಖ ಕಾರಣಗಳು ಈ ಕೆಳಕಂಡಂತಿರುತ್ತವೆ.<br>1.ಕಾರ್ಖಾನೆಯ ಆರ್ಥಿಕ ದುಸ್ಥಿತಿ ಮತ್ತು ದುಡಿಯುವ ಬಂಡವಾಳದ ಕೊರತೆ.<br>2. ಕಾರ್ಖಾನೆಯು ಸುಮಾರು 50 ವರ್ಷಗಳಷ್ಟು ಹಳೆಯದಾಗಿದ್ದು, ಹಾಲಿ ಇರುವ ಯಂತ್ರೋಪಕರಣಗಳು ಕಾರ್ಖಾನೆಯ ಪ್ರಸ್ತುತ ಇರುವ 3500 ಟಿಸಿಡಿ ಸಾಮರ್ಥ್ಯವನ್ನು ಉಪಯೋಗಿಸಲು ಸಾಧ್ಯವಾಗದಿರುವುದು.<br>3. ಕಾರ್ಖಾನೆಯು ಸಕ್ಕರೆ ಘಟಕವನ್ನು ಮಾತ್ರ ಹೊಂದಿದ್ದು, ಇತರೆ ಉಪ ಉತ್ಪನ್ನಗಳಾದ ಸಹ ವಿದ್ಯುತ್ ಘಟಕ ಹಾಗೂ ಡಿಸ್ಟಿಲರಿ / ಎಥನಾಲ್ ಘಟಕಗಳನ್ನು ಹೊಂದಿರುವುದಿಲ್ಲ.<br>4. ಹಾಲಿ ಕಾರ್ಖಾನೆಯಲ್ಲಿ ಕಾರ್ಯನಿರ್ವಹಿಸುತ್ತಿರುವ ಸಿಬ್ಬಂದಿ/ಕಾರ್ಮಿಕ ವರ್ಗದವರಲ್ಲಿ ತಾಂತ್ರಿಕ ಪರಿಣತಿ ಹೊಂದಿರುವ ಸಿಬ್ಬಂದಿಗಳ ಕೊರತೆ ಇರುವುದು.<br>5. ನಿರೀಕ್ಷಿತ ಪ್ರಮಾಣದಲ್ಲಿ ಕಬ್ಬಿನ ಲಭ್ಯತೆ ಇಲ್ಲದಿರುವುದು ಹಾಗೂ ಕಡಿಮೆ ಇಳುವರಿ ಸಾಧಿಸಿರುವುದು. |
| (ಈ) | ಈ ಕಾರ್ಖಾನೆಯು ಪುನರ್ ಪ್ರಾರಂಭಿಸುವ ಬಗ್ಗೆ ಸರ್ಕಾರ ಕೈಗೊಂಡ ಕ್ರಮಗಳೇನು? (ವಿವರ ಒದಗಿಸುವುದು) | ಆರ್ಥಿಕ ಸಂಕಷ್ಟದಿಂದ ಹಾಗೂ ಇತರೆ ಕಾರಣಗಳಿಂದ ಸ್ಥಗಿತಗೊಂಡಿರುವ ಸಹಕಾರಿ ಸಕ್ಕರೆ ಕಾರ್ಖಾನೆಗಳನ್ನು ಖಾಸಗಿಯವರಿಗೆ ಗುತ್ತಿಗೆ ನೀಡುವುದರ ಮೂಲಕ ಪುನರ್ ಪ್ರಾರಂಭಿಸುವುದು ಸರ್ಕಾರದ ಪ್ರಚಲಿತ ನೀತಿಯಾಗಿರುತ್ತದೆ. ಈ ಕಾರ್ಖಾನೆಯನ್ನು ಖಾಸಗಿಯವರಿಗೆ ಗುತ್ತಿಗೆ ನೀಡುವುದರ ಬಗ್ಗೆ ಕಾರ್ಖಾನೆಯ ವ್ಯವಸ್ಥಾಪಕ ನಿರ್ದೇಶಕರಿಂದ ವರದಿ ಕೋರಲಾಗಿರುತ್ತದೆ. ವರದಿ ಬಂದ ನಂತರ ಸಾಧಕ-ಬಾಧಕಗಳನ್ನು ಪರಿಶೀಲಿಸಿ, ಪುನರ್ ಪ್ರಾರಂಭಿಸುವುದರ ಬಗ್ಗೆ ಪರಿಶೀಲಿಸಲಾಗುವುದು. |

ಸಂಖ್ಯೆ: ಸಿಐ 19 ಎಸ್‌ಜಿಎಫ್ 2021

(ಎನ್. ನಾಗರಾಜು.ಎಂ.ಟಿ.ಬಿ.)
ಪೌರಾಡಳಿತ ಮತ್ತು ಸಕ್ಕರೆ ಸಚಿವರು.